KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜನವರಿ ೮, ೨೦೦೯ (ಪುಷ್ಯ ೧೮, ಶಕ ವರ್ಷ ೧೯೩೦) | ಸಂಚಿಕೆ ೨ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

### ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಕಂಇ 80 ಎಲ್‌ಆರ್‌ಎಂ 2008, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2008**

ಕರ್ನಾಟಕ ಎಜ್ಯುಕೇಷನ್ ಸೊಸೈಟಿ, ನಂ.121, 3ನೇ ಹಂತ, 3ನೇ ಕ್ರಾಸ್, ಜೆ.ಪಿ.ನಗರ, ಬೆಂಗಳೂರು, ಇವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ದಿಬ್ಬೂರು ಗ್ರಾಮದ ಸರ್ವೆ ನಂ.21/1ರ ಪೈಕಿ 3 ಎಕರೆ 20 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ನಮೂನೆ 15–ಎ, ರಲ್ಲಿ ಕೋರಲಾಗಿದ್ದು, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಉಪ ನಗರ, ಇವರು ನಮೂನೆ 15–ಎಎ, ಗಳಲ್ಲಿ ಒದಗಿಸಿದ ಮಾಹಿತಿ ಅನುಸರಿಸಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಇವರ ಪತ್ರ ಸಂಖ್ಯೆ: ಎಲ್‌ಆರ್‌ಎಫ್/ಸಿಆರ್/22/08–09 ದಿನಾಂಕ: 24.09.2008ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಗ್ರಾಮದ ಸರ್ವೆ ನಂ. 21/1ರಲ್ಲಿ ಒಟ್ಟು 3 ಎಕರೆ 20 ಗುಂಟೆ ಜಮೀನನ್ನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109ರ ಉಪ ಕಲಂ (i) ರಡಿಯ ಪರಂತುಕ (ii) ರಲ್ಲಿ ಅನುಮೋದನೆ/ವಿನಾಯಿತಿ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ, ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79–ಬಿ ಮತ್ತು 80ಕ್ಕೆ ವಿನಾಯಿತಿ ನೀಡಿ ಕರ್ನಾಟಕ ಎಜ್ಯುಕೇಷನ್ ಸೊಸೈಟಿ ಟ್ರಸ್ಟ್, ಬೆಂಗಳೂರು ಇವರಿಗೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರುಘಟ್ಟ ಹೋಬಳಿ, ದಿಬ್ಬೂರು ಗ್ರಾಮದ ಸರ್ವೆ ನಂ.21/1ರ ಪೈಕಿ 3 ಎಕರೆ 20 ಗುಂಟೆ, ಜಮೀನನ್ನು **ಶೈಕ್ಷಣಿಕ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಉಪ ಕಲಂ (i) ರಡಿಯ ಪರಂತುಕ (ii)ರಲ್ಲಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

ಪಿ.ಆರ್. 493

**ಕಂದಾಯ ಸಚಿವಾಲಯ, ಬೆಂಗಳೂರು**

**ಭೂಸ್ವಾಧೀನ ಅಧಿನಿಯಮದ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 34 ಭೂಸ್ವಾತು 2008, ದಿನಾಂಕ: 20ನೇ ನವೆಂಬರ್ 2008**

ಇದರ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿರುವ ಭೂಮಿಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ತುಮಕೂರು ನಗರಸಭೆಗೆ ಸೇರಿದ ಖಾಸಗಿ ನಿಲ್ದಾಣವನ್ನು ನೂತನವಾಗಿ ವ್ಯವಸ್ಥೆಗೊಳಿಸಿ ಹಾಗೂ ಸದರಿ ಆವರಣದಲ್ಲಿ ಅಂಗಡಿ ಮಳಿಗೆ ಸಂಕೀರ್ಣವನ್ನು ನಿರ್ಮಿಸಲು ನಗರಸಭೆ, ತುಮಕೂರು ಅಗತ್ಯವಾಗಿದ್ದವು ಎಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂಸ್ವಾಧೀನ ಕಾಯ್ದೆ 1894 ರ ಕಲಂ 4(1) ರ ಮೇರೆಗೆ ಅಧಿಸೂಚನೆ ಕ್ರಮಾಂಕ: ಎಲ್‌ಎಕ್ಯೂ:ಎಸ್‌ಆರ್:26/2007–08, ದಿನಾಂಕ: 3.10.2007ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ,

ಮತ್ತು ಕರ್ನಾಟಕ ಕಾಯ್ದೆ 33:1991 ರನ್ವಯ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 ರ (ಕೇಂದ್ರ ಅಧಿನಿಯಮ 1894ರ 1) 5–ಎ ಪ್ರಕರಣದ (2)ನೇ ಉಪ–ಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಉಪಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟ ಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಅರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ಉಪ ವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ, ತುಮಕೂರು ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಅರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಅರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಉಪ ವಿಭಾಗಾಧಿಕಾರಿಗಳು, ತುಮಕೂರು ಉಪವಿಭಾಗ ತುಮಕೂರು ಇವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ತಾಲ್ಲೂಕು:** ತುಮಕೂರು **ಹೋಬಳಿ:** ಕಸಬಾ **ಗ್ರಾಮ:** ತುಮಕೂರು

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಮು.ಖಾ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ವಿಸ್ತೀರ್ಣ ಚ.ಅಡಿ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1. | ಟಿ.ಎಸ್. ನಾಗಭೂಷಣ | ಟಿ.ಎಸ್. ನಾಗಭೂಷಣ | 3326/ 1225 | ಕಟ್ಟಡ | ಗೋವಿಂದಸ್ವಾಮಿ | ಬಸ್ ಸ್ಟಾಂಡ್ | ಬಸ್ ಸ್ಟಾಂಡ್ | ರಸ್ತೆ | 842 | – |
| 2. | ಗೋವಿಂದಸ್ವಾಮಿ | ಗೋವಿಂದಸ್ವಾಮಿ | 3325/ 1224 | ಕಟ್ಟಡ | ಟಿ. ನಾರಾಯಣ್ | ಟಿ.ಎಸ್. ನಾಗಭೂಷಣ | ಬಸ್ ಸ್ಟಾಂಡ್ | ರಸ್ತೆ | 376 | – |
| 3. | ಟಿ. ನಾರಾಯಣ್ | ಟಿ. ನಾರಾಯಣ್ | 3324/ 1223 | ಕಟ್ಟಡ | ಟಿ.ಕೆ. ಲಕ್ಷ್ಮಿನಾರಾಯಣ ಮತ್ತು ಎ.ಜಿ. ಶಿವಶಂಕರ್ | ಗೋವಿಂದ ಸ್ವಾಮಿ | ಬಸ್ ಸ್ಟಾಂಡ್ | ರಸ್ತೆ | 450.5 | |
| 4. | ಟಿ.ಕೆ. ಲಕ್ಷ್ಮಿನಾರಾಯಣ್ | ಟಿ.ಕೆ. ಲಕ್ಷ್ಮಿನಾರಾಯಣ್ | 3323/ಎ 1222ಎ | ಕಟ್ಟಡ | ಟಿ.ಕೆ. ವೆಂಕಟರಾಮ್ | ಟಿ. ನಾರಾಯಣ್ | ಎ.ಜಿ. ಶಿವಶಂಕರ್ | ರಸ್ತೆ | 256.5 | – |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಮು.ಖಾ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ ವಿಸ್ತೀರ್ಣ ಚ.ಅಡಿ | ಆಕಾರ ರೂ. ಪೈ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 5. | ಎ.ಜಿ. ಶಿವಶಂಕರ್ | ಎ.ಜಿ. ಶಿವಶಂಕರ್ | 3322/ 1221 | ಕಟ್ಟಡ | ರಸ್ತೆ | ಟಿ. ನಾರಾಯಣ್ | ಬಸ್ ಸ್ಟಾಂಡ್ | ಟಿ.ಕೆ. ಲಕ್ಷ್ಮಿನಾರಾಯಣ್ | 373 | – |
| 6. | ಟಿ.ಕೆ. ವೆಂಕಟರಾಮ್ | ಟಿ.ಕೆ. ವೆಂಕಟರಾಮ್ | 3323/ 1222 | ಕಟ್ಟಡ | ರಸ್ತೆ | ಟಿ.ಕೆ. ಲಕ್ಷ್ಮಿನಾರಾಯಣ್ | ಎ.ಜಿ. ಶಿವಶಂಕರ್ | ರಸ್ತೆ | 42 | – |
| | | | | | **ಒಟ್ಟು** | | | | **2340** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 2

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ: ಕಂಇ 34 ಭೂಸ್ವಾಗ್ರಾ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಅರ್ಕಾವತಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಅಗತ್ಯವಾಗಲಿವೆ ಎಂದು ರಾಮನಗರ ಜಿಲ್ಲೆಯ ಜಿಲ್ಲಾಧಿಕಾರಿಯವರು ಭೂ ಸ್ವಾಧೀನ ಕಾಯ್ದೆ 1894ರ ಕಲಂ4(1)ರ ಮೇರೆಗೆ ಅಧಿಸೂಚನೆಗೆ ಕ್ರಮಾಂಕ: ಎಲ್.ಎಕ್ಯೂ.ಎಸ್.ಆರ್. ರಾಜಿಕ2:ಎಲ್ಎಕ್ಯೂಎಸ್ಆರ್:73/07–08 ದಿನಾಂಕ:24.12.07 ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ.

ಮತ್ತು ಕರ್ನಾಟಕ ಕಾಯ್ದೆ: 33–1991ರನ್ವಯ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894 (ಕೇಂದ್ರ ಅಧಿನಿಯಮ ಸಂಖ್ಯೆ 1894ರ1) 5–ಎ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 6(1ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಅರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ:

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪವಿಭಾಗ, ರಾಮನಗರ ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಅರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ನೇಮಕ ಮಾಡಲಾಗಿದೆ. ಹಾಗೂ ಸದರಿ ಭೂಮಿಯ ಅರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳುವ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು ರಾಮನಗರ ಉಪ ವಿಭಾಗ, ರಾಮನಗರ ಇವರ ಕಛೇರಿಯಲ್ಲಿ ಇಡಲಾಗಿದೆ. (ಎಲ್ಎ.ಎಸ್ಆರ್.4/07–08)

**ಅನುಸೂಚಿ**

**ಜಿಲ್ಲೆ:** ರಾಮನಗರ **ತಾಲ್ಲೂಕು:** ರಾಮನಗರ **ಹೋಬಳಿ:** ಕಸಬಾ **ಗ್ರಾಮ:** ಹಾಗಲಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ–ಗುಂ | ಕಂದಾಯ ರೂ–ಪೈ |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಮುನಿಮಾರಕ್ಕ | ಮುನಿಮಾರಕ್ಕ | 104:6ಸಿ | ಭಾಗಾಯ್ತು | 104:6ಎ | 104:6ಸಿ | 104:6ಬಿ | ಓಣಿ | 0–01.00 | 0–67 |
| 2 | ವೆಂಕಟಮ್ಮ | ವೆಂಕಟಮ್ಮ | 104:6ಸಿ | ಖುಷ್ಕಿ | 104:6ಸಿ | 104:9 | 104:6ಸಿ | ಓಣಿ | 0–01.00 | 0–76 |
| 3 | ಹೇಮಗಿರಯ್ಯ ಬಿನ್ ಹೇಮಗಿರಯ್ಯ | ಹೇಮಗಿರಯ್ಯ | 193:4 | ಖುಷ್ಕಿ | 193:5 | 193:4 | 193:4 | ಓಣಿ | 0–50.00 | – |
| 4 | ಶಿವಲಿಂಗಮ್ಮ ಕೋಂ ಕೆಂಪಯ್ಯ | ಶಿವಲಿಂಗಮ್ಮ | 193:5 | ಖುಷ್ಕಿ | 193:7 | 193:4 | 193:5 | ಓಣಿ | 0–01.50 | 5–95 |
| 5 | ಪುಟ್ಟಯ್ಯ ಬಿನ್ ಕೆಂಪಯ್ಯ | ಪುಟ್ಟಯ್ಯ | 193:7 | ಖುಷ್ಕಿ | 193:8 | 193:5 | 193:7 | ಓಣಿ | 0–01.00 | – |
| 6 | ಶಿವಲಿಂಗಮ್ಮ ಕೋಂ ಚಿಕ್ಕಣ್ಣ | ಶಿವಲಿಂಗಮ್ಮ | 193:8 | ಭಾಗಾಯ್ತು | ನದಿ | 193:7 | 193:8 | ಓಣಿ | 0–05.00 | – |
| 7 | ಶಿವಣ್ಣ ಬಿನ್ ಬೋರೇಗೌಡ | ಶಿವಣ್ಣ | 188:6 | ಭಾಗಾಯ್ತು | ನದಿ | 188:7 | ಓಣಿ | 188:8 | 0–03.00 | – |
| 8 | ಕೆಂಪಯ್ಯ ಬಿನ್ ಮುನಿತಿಮ್ಮಯ್ಯ | ಕೆಂಪಯ್ಯ | 194:9 | ಖುಷ್ಕಿ | 104:6ಸಿ | ನದಿ | 194:9 | 106 | 0–05.00 | – |
| | | | | | | | | **ಒಟ್ಟು** | **0–13.05** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 3

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

**ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ಭೂ ಅರ್ಜನೆ ಅಧಿನಿ0ಯಮ 4(1) ನೇ ಪ್ರಕರಣದ ಮೇರೆಗೆ ಅಧಿಸೂಚನೆ.**

**ಕ್ರಮಾಂಕ: ಎಲ್.ಎ.ಕ್ಯೂ:ಎಸ್.ಆರ್/42/08–09, ದಿನಾಂಕ: 17ನೇ ಡಿಸೆಂಬರ್ 2008**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಪಾವಗಡ ತಾಲ್ಲೂಕಿನಲ್ಲಿ ಕೈಗಾರಿಕಾ ವಸಾಹತು ಸ್ಥಾಪನೆಗಾಗಿ ಅಗತ್ಯವಾಗಿದೆಯೆಂದು ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಗೆ ಕಂಡು ಬಂದಿರುವುದರಿಂದ ಕರ್ನಾಟಕ ಕಾಯಿದೆ 33/1991 ರ ಅನ್ವ0ು ತಿದ್ದುಪಡಿಯಾದ ಕೇಂದ್ರ ಅಧಿನಿಯಮ 1894 ರ 4ನೇ ಪ್ರಕರಣದ (1) ನೇ ಉಪಪ್ರಕರಣದ ಅನುಸಾರವಾಗಿ ಅದಕ್ಕೆ ಸಂಬಂಧಪಟ್ಟ ಎಲ್ಲರಿಗೂ ಆ ಬಗ್ಗೆ ಈ ಮೂಲಕ ನೋಟೀಸುಗಳನ್ನು ಕೊಡಲಾಗಿದೆ. ಹಾಗೂ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ,

ತುಮಕೂರು ರವರು ಅಧಿನಿ0ಯಮದ 4(2) ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಮಧುಗಿರಿ ಉಪ ವಿಭಾಗ, ಮಧುಗಿರಿ ಹಾಗೂ ಅವರ ಸಿಬ್ಬಂದಿ ಮತ್ತು ಕೆಲಸಗಾರರಿಗೆ ಈ ಮೂಲಕ ಅಧಿಕಾರ ನೀಡಿರುತ್ತಾರೆ.

ಸದರಿ ಅಧಿನಿ0ಯಮದ 3(ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ರವರು ಅಧಿನಿಯಮ 5ಎ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರ ಪ್ರಕಾ0ರ್ಯಗಳನ್ನು ನಿರ್ವಹಿಸಲು ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರನ್ನು ನೇಮಕ ಮಾಡಿರುತ್ತಾರೆ.

ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಯು ತನ್ನ ಆಕ್ಷೇಪಣೆಗಳು 0ಯಾವುದಾದರೂ ಇದ್ದರೆ ಅವುಗಳನ್ನು ಈ ಅಧಿಸೂಚನೆ ಪ್ರಕಟಗೊಂಡ ತಾರೀಖಿನಿಂದ 30 ದಿನಗಳ ಒಳಗಾಗಿ ಅಥವಾ ಅದಕ್ಕೆ ಮುಂಚೆ ಕರ್ನಾಟಕ ಕಾಯಿದೆ 33/1991 ರನ್ವ0ಯ ತಿದ್ದುಪಡಿ0ಯಾದ ಭೂ ಅರ್ಜನೆ ಕೇಂದ್ರ ಅಧಿನಿ0ಯಮ 1894 ರ (ಸಿ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿ0ಯವರ ಪ್ರಕಾ0ರ್ಯಗಳನ್ನು ನಿರ್ವಹಿಸಲು ಉಪವಿಭಾಗಾಧಿಕಾರಿಗಳು, ಮಧುಗಿರಿ ಇವರಿಗೆ ಲಿಖಿತವಾಗಿ ಸಲ್ಲಿಸಬಹುದು.

ಭೂಅರ್ಜನೆ ಉದ್ದೇಶಕ್ಕಾಗಿ ಘೋಷಿತ ಭೂಮಿಗಳ ಮೇಲೆ ನಿ0ಯೋಜಿತರಾದ 0ಯಾವನೇ ಮೋಜಣಿದಾರ ಅಥವಾ ಇತರೆ ವ್ಯಕ್ತಿಗಳಿಗೆ ಅಡ್ಡಿ0ಯನ್ನುಂಟು ಮಾಡಬಾರದೆಂದು ಪ್ರಕಟಿತ ಭೂಮಿಗಳಲ್ಲಿ ಹಿತಾಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಈ ಅಧಿಸೂಚನೆ0ಯು ಪ್ರಕಟವಾದ ದಿನಾಂಕದ ನಂತರ ತುಮಕೂರು ಜಿಲ್ಲೆ0ಯ ಜಿಲ್ಲಾಧಿಕಾರಿ0ಯವರ ಅನುಮತಿಯಿಲ್ಲದೆ ಮಾರಾಟ, ಗುತ್ತಿಗೆ, ಅಡಮಾನ ವಿನಿಮಯದ ಮೂಲಕ ಅಥವಾ ಬೇರೆ ರೀತಿಯ ಮೂಲಕ ಪ್ರಕಟಿತ ಭೂಮಿಗಳ ವಿಲೇಗಾಗಿ ಮಾಡಿಕೊಂಡ 0ಯಾವುದೇ ಕರಾರುಗಳನ್ನು ಅಥವಾ ಅದರಲ್ಲಿ ಮಾಡಲಾದ ವೆಚ್ಚ ಅಥವಾ ಅಭಿವೃದ್ಧಿಗಳನ್ನು ಅ0ತಿಮವಾಗಿ ಅರ್ಜನೆ ಮಾಡಿಕೊಳ್ಳಲಾಗುವ ಭೂಮಿಗಳ ಅಂತಹ ಭಾಗಗಳಿಗೆ ಪರಿಹಾರಕ್ಕಾಗಿ ನಿರ್ಧರಣೆ ಮಾಡುವ ಅಧಿಕಾರಿಯು ಭೂ ಅರ್ಜನೆ ಅಧಿನಿ0ಯಮದ (7ನೇ ಖಂಡದ) 2ನೇ ಪ್ರಕರಣದ ಮೇರೆಗೆ ಗಣನೆಗೆ ತೆಗೆದುಕೊಳ್ಳಬಾರದು.

ಉಪವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು ಮಧುಗಿರಿ ಉಪ ವಿಭಾಗ, ಮಧುಗಿರಿ ಇವರ ಕಛೇರಿಯಲ್ಲಿ ಭೂಮಿಗಳ ಸ್ಥೂಲ ನಕ್ಷೆಯನ್ನು ಪರಿಶೀಲನೆಗೆ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ :** ತುಮಕೂರು **ತಾಲ್ಲೂಕು :** ಪಾವಗಡ **ಹೋಬಳಿ :** ಕಸಬಾ **ಗ್ರಾಮ :** ಕಡಮಲಕುಂಟೆ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ವಿಸ್ತೀರ್ಣ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | ಎ–ಗುಂ | ರೂ. ಪೈ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8ಎ | 8ಬಿ | 8ಸಿ | 8ಡಿ |
| 1. | ಕೆ.ಎನ್.ಅಡವಪ್ಪ<br>ಶೇಷಗಿರಿ ಬಿನ್ ಟಿ.ನಾಗಪ್ಪ<br>ಸಿದ್ದಮ್ಮ ಕೋಂ ಟಿ.ನಾಗಪ್ಪ | ಕೆ.ಎನ್.ಅಡವಪ್ಪ<br>ಶೇಷಗಿರಿ<br>ಸಿದ್ದಮ್ಮ | 64 | ತರಿ | 7–20 | 4–50 | ಕೆರೆ ಅಂಗಳ | ಸ.ನಂ–66 | ಸ.ನಂ–68 | ಪಾವಗಡ – ಪೆನುಕೊಂಡ ರಸ್ತೆ |
| 2. | ಸಿದ್ದಮ್ಮ ಕೋಂ ಟಿ.ನಾಗಪ್ಪ<br>ಎನ್.ಶೇಷಗಿರಿ ಬಿನ್ ಟಿ.ನಾಗಪ್ಪ<br>ಕೆ.ಎನ್.ಅಡವಪ್ಪ ಬಿನ್ ನಾಗಪ್ಪ<br>ಬಾಬನ್ನ ಬಿನ್ ಲಕ್ಷ್ಮಪ್ಪ<br>ಲಕ್ಷ್ಮಮ್ಮ ಕೋಂ ರಾಮರೆಡ್ಡಿ | ಸಿದ್ದಮ್ಮ<br>ಶೇಷಗಿರಿ<br>ಅಡವಪ್ಪ<br>ಬಾಬನ್ನ<br>ಲಕ್ಕಪ್ಪ<br>ಲಕ್ಷ್ಮಮ್ಮ | 65 | ಖುಷ್ಕಿ<br>ಬಾಗಾ0ಯ್ತು | 1–29<br>2–32 | 0–52<br>2–02 | ಸ.ನಂ–64 | ಪಾವಗಡ ಗಡಿ | ಸ.ನಂ–67 ಮತ್ತು 66 | ಪಾವಗಡ– ಪೆನುಕೊಂಡ ರಸ್ತೆ |
| 3. | ಶೇಷಗಿರಿ ಬಿನ್ ಟಿ.ನಾಗಪ್ಪ<br>ಸಿದ್ದಮ್ಮ ಕೋಂ ಟಿ.ನಾಗಪ್ಪ | ಶೇಷಗಿರಿ<br>ಸಿದ್ದಮ್ಮ | 66 | ಬಾಗಾ0ಯ್ತು | 5–05 | 3–28 | ಸ.ನಂ–66 | ರೊಪ್ಪ<br>ಪಾವಗಡ ಗಡಿ | ಸ.ನಂ–68 | ಸ.ನಂ–67 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ತರಹೆ | ವಿಸ್ತೀರ್ಣ | ಆಕಾರ | ಚಕ್ಕುಬಂದಿ | | | |
|---|---|---|---|---|---|---|---|---|---|---|
| | | | | | ಎ–ಗುಂ | ರೂ. ಪೈ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8ಎ | 8ಬಿ | 8ಸಿ | 8ಡಿ |
| 4. | ಸಿದ್ದಮ್ಮ ಕೋಂ ಟಿ.ನಾಗಪ್ಪ<br>ಎನ್.ಶೇಷಗಿರಿ ಬಿನ್ ಟಿ.ನಾಗಪ್ಪ<br>ಕೆ.ಎನ್.ಅಡವಪ್ಪ ಬಿನ್ ನಾಗಪ್ಪ<br>ಬಾಬನ್ನ ಬಿನ್ ಲಕ್ಷ್ಮಪ್ಪ<br>ಲಕ್ಕಪ್ಪ ಬಿನ್ ಲಕ್ಷ್ಮಪ್ಪ<br>ಲಕ್ಷ್ಮಮ್ಮ ಕೋಂ ರಾಮರೆಡ್ಡಿ | ಅಡವಪ್ಪ<br>ಸಿದ್ದಮ್ಮ<br>ಶೇಷಗಿರಿ<br>ಬಾಬನ್ನ<br>ಲಕ್ಕಪ್ಪ<br>ಲಕ್ಷ್ಮಮ್ಮ | 67 | ಖುಷ್ಕಿ<br>ಬಾಗಾಯ್ತು | 3–02<br>2–02 | 1–44<br>1–48 | ಸ.ನಂ–66 | ರೊಪ್ಪ<br>ಪಾವಗಡ ಗಡಿ | ಸ.ನಂ–68 | ಸ.ನಂ–65 |
| 5. | ಸಿದ್ದಮ್ಮ ಕೊಂ ಟಿ.ನಾಗಪ್ಪ<br>ಎನ್.ಶೇಷಗಿರಿ ಬಿನ್ ಟಿ.ನಾಗಪ್ಪ<br>ಕೆ.ಎನ್.ಅಡವಪ್ಪ ಬಿನ್ ನಾಗಪ್ಪ<br>ಬಾಬನ್ನ ಬಿನ್ ಲಕ್ಷ್ಮಪ್ಪ<br>ಲಕ್ಕಪ್ಪ ಬಿನ್ ಲಕ್ಷ್ಮಪ್ಪ<br>ಲಕ್ಷ್ಮಮ್ಮ ಕೋಂ ರಾಮರೆಡ್ಡಿ | ಸಿದ್ದಮ್ಮ<br>ಎನ್.ಶೇಷಗಿರಿ<br>ಅಡವಪ್ಪ<br>ಬಾಬನ್ನ<br>ಲಕ್ಕಪ್ಪ<br>ಲಕ್ಷ್ಮಮ್ಮ | 68 | ಖುಷ್ಕಿ | 31–15 | 10–67 | ಕೆರೆ ಅಂಗಳ | ಪಾವಗಡ ಗಡಿ | ಸ.ನಂ–69 | ಸ.ನಂ–64, 66 ಮತ್ತು 67 |

**ಡಾ॥ ಎನ್.ಶಿವಶಂಕರ.ಕೆ.ಎ.ಎಸ್.**
ಉಪವಿಭಾಗಾಧಿಕಾರಿ ಹಾಗೂ
ಭೂಸ್ವಾಧೀನಾಧಿಕಾರಿ
ಮಧುಗಿರಿ ಉಪ ವಿಭಾಗ, ಮಧುಗಿರಿ.

**ಡಾ॥ ಸಿ.ಸೋಮಶೇಖರ ಐ.ಎ.ಎಸ್.**
ಜಿಲ್ಲಾಧಿಕಾರಿಗಳು
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 8

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಭೂ ಸ್ವಾಧೀನ ಕಾಯ್ದೆ ಕಲಂ 4(1) ರ ಅಧಿಸೂಚನೆ ನಂ. ಎಲ್ಎಕ್ಯೂ: ಎಸ್ಆರ್: 05/08–09, ದಿನಾಂಕ: 3ನೇ ಡಿಸೆಂಬರ್ 2008**

ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಚಿಕ್ಕಕಲ್ಲಸಂದ್ರ ಗ್ರಾಮದ ಆಸ್ತಿ ಸಂಖ್ಯೆ 278, 213, 260 ರ ಸ್ವತ್ತುಗಳನ್ನು ಭೂ ಸ್ವಾಧೀನಪಡಿಸಿಕೊಂಡು ರಸ್ತೆ ನಿರ್ಮಿಸುವ ಉದ್ದೇಶಕ್ಕಾಗಿ ಲೋಕೋಪಯೋಗಿ ಇಲಾಖೆಯವರ ಪರವಾಗಿ ಬೇಕಾಗಬಹುದೆಂದು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರಿಗೆ ಕಂಡು ಬಂದಿರುವುದರಿಂದ 1991ನೇ ಸಾಲಿನ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ ಭೂ ಸ್ವಾಧೀನ ಅಧಿನಿಯಮ ಸಂಖ್ಯೆ 1984ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ ಮತ್ತು 1894ನೇ ಇಸವಿಯಲ್ಲಿ ತಿದ್ದುಪಡಿಯಾದ ಭೂಸ್ವಾಧೀನ ಕಾಯ್ದೆ ಅಧಿನಿಯಮ 4(2)ನೇ ಪ್ರಕರಣದಿಂದ ವಿಹಿತವಾದ ಅಧಿಕಾರಗಳನ್ನು ಉಪಯೋಗಿಸಲು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, 3ನೇ ಮಹಡಿ, ಬೆಂಗಳೂರು–1 ಇವರಿಗೆ ಮತ್ತು ಸಿಬ್ಬಂದಿಯವರಿಗೆ ಈ ಮೂಲಕ ಪ್ರಾಧಿಕಾರ ನೀಡಲಾಗಿದೆ.

ಕರ್ನಾಟಕ ಭೂ ಸ್ವಾಧೀನ ಕಾಯ್ದೆ ಅಧಿನಿಯಮ 4(1)ರ ಪ್ರಕಾರ ತಿಳಿಯಪಡಿಸುವುದೇನೆಂದರೆ ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯನ್ನು ಈ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದರೆ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗಾಗಿ 1961ನೇ ಸಾಲಿನ ಕರ್ನಾಟಕ ಅಧಿನಿಯಮ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮ (ಸಿ) ಭೂಸ್ವಾಧೀನ ಕಾಯ್ದೆ 1894ನೇ ಇಸವಿಯಲ್ಲಿ ತಿದ್ದುಪಡಿಯಾದ ಭೂ ಸ್ವಾಧೀನ ಅಧಿನಿಯಮ ಪ್ರಕರಣದ ಮೇರೆಗೆ ವಿಶೇಷ ಜಿಲ್ಲಾಧಿಕಾರಿಯವರು ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಿ ನೇಮಕ ಮಾಡಲಾದ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಭೂಸ್ವಾಧೀನಕ್ಕಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರ ಅಥವಾ ಬೇರೆ ವ್ಯಕ್ತಿಗಳಿಗೆ ಅಡಚಣೆಯನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳವರಿಗೆಲ್ಲಾ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನಲ್ಲಿ ವಿಲೇವಾರಿಗಾಗಿ ಮಾರಾಟ, ಗುತ್ತಿಗೆ, ಅಡಮಾನ, ಹಸ್ತಾಂತರ ವಿನಿಮಯ ಅಥವಾ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಥವಾ ಯಾವೊಂದು ಅಭಿವೃದ್ಧಿಗಳನ್ನು ಈ ಅಧಿಸೂಚನೆಯು ಪ್ರಕಟವಾದ ನಂತರ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರಿ ಜಮೀನಿನ ಅಂತಹ ಭಾಗಗಳಿಗೆ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ 7ನೇ ಖಂಡದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, 3ನೇ ಮಹಡಿ, ಬೆಂಗಳೂರು–1 ಇವರ ಕಾರ್ಯಾಲಯದಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಬೆಂಗಳೂರು **ತಾಲ್ಲೂಕು:** ದಕ್ಷಿಣ **ಹೋಬಳಿ:** ಉತ್ತರಹಳ್ಳಿ **ಗ್ರಾಮ:** ಚಿಕ್ಕಲ್ಲಸಂದ್ರ

| ಕ್ರ. ಸಂ. | ಖಾತೆದಾರರ : ಅನುಭವದಾರರ ಹೆಸರು | ಆಸ್ತಿ ಸಂಖ್ಯೆ | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನಕ್ಕೆ ಬೇಕಾದ ಜಮೀನಿನ ವಿಸ್ತೀರ್ಣ | |
|---|---|---|---|---|---|---|---|---|---|
| | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಎಕರೆ:ಗುಂಟೆ | ಆಕಾರ |
| 1. | ನೀಲಮ್ಮ ಕೋಂ ಕೃಷ್ಣಮ್‌ನಾಯ್ಡು | 278, 213 260 | – | ಉತ್ತರಹಳ್ಳಿ ರಸ್ತೆ | ತಾಯಪ್ಪನ ಜಮೀನು | ಮುನಿಯಪ್ಪನ ಜಮೀನು | ಇತರರ ಜಮೀನು | 2745 ಚ. ಅಡಿ | 10–00 |

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 22